೨

# ರೀಡಿಸೈಡ್ – ಹೌ ಸ್ಕೂಲ್ಸ್ ಆರ್ ಕಿಲ್ಲಿಂಗ್ ರೀಡಿಂಗ್ ಅಂಡ್ ವಾಟ್ ಯು ಕ್ಯಾನ್ ಡು ಅಬೌಟ್ ಇಟ್ –ಕೆಲ್ಲಿ ಗಲ್ಲಾಘರ್

– ವಂದನಾ ಪುರಿ




ಲೇಖಕರು: ಕೆಲ್ಲಿ ಗಲ್ಲಾಘರ್
ವರ್ಷ: ೨೦೦೯
ಪ್ರಕಟನೆ: ಮೈನ್: ಸ್ಟನ್ ಹೌಸ್ ಪಬ್ಲಿಕೇಶನ್
ಐಎಸ್‌ಬಿನ್: 978–1–57110–780–0

**Readicide: How Schools are Killing Reading and What You Can Do about It - By Kelly Gallagher**

ಪುಸ್ತಕ ರೀಡಿಸೈಡ್ – ಹೌ ಸ್ಕೂಲ್ಸ್ ಆರ್ ಕಿಲ್ಲಿಂಗ್ ರೀಡಿಂಗ್ ಅಂಡ್ ವಾಟ್

ಯು ಕ್ಯಾನ್ ಡು ಅಬೌಟ್ ಇಟ್ (ವಾಚನ ಹತ್ಯೆ – ಹೇಗೆ ಶಾಲೆಗಳು ವಾಚನವನ್ನು ಕೊಲ್ಲುತ್ತಿವೆ ಹಾಗೂ ಇದರ ಬಗ್ಗೆ ನೀವು ಏನು ಮಾಡಬಹುದು)

**ಸಾರಾಂಶ: ಮಕ್ಕಳಿಗೆ ಓದುವುದನ್ನು ಹೇಗೆ ಆಸಕ್ತಿದಾಯಕಗೊಳಿಸಬಹುದೋ, ಅದೇ ರೀತಿ ಪ್ರಸ್ತುತ ಶಾಲಾ ಸನ್ನಿವೇಶಗಳಲ್ಲಿ ಅವರಿಗೆ ಓದುವಿಕೆಯನ್ನು ದ್ವೇಷಿಸದ ರೀತಿಯಲ್ಲಿ ಮಾಡುವುದೂ ಸಾಧ್ಯವಿದೆ ಎಂದು ಈ ಪುಸ್ತಕವು ಪ್ರಸ್ತಾವಿಸುತ್ತದೆ. ಇತ್ತೀಚಿನ ದಿನಗಳಲ್ಲಿ ಕೇಳಿಬರುವ ಶಿಕ್ಷಕರ ಹಾಗೂ ಪೋಷಕರ ಕಾಳಜಿಗಳಿಗೆ ತಕ್ಕಂತೆ ವಾಚನ ಹಾಗೂ ಅದರ ಸುತ್ತಲು ಇರುವ ವ್ಯವಸ್ಥಿತ ಅಂಶಗಳನ್ನು ನಮ್ಮ ಮುಂದಿಡಲು ಈ ಪುಸ್ತಕ ಪ್ರಯತ್ನಿಸುತ್ತದೆ. ಅಷ್ಟೇ ಅಲ್ಲದೆ ವಾಚನ ಸಮಸ್ಯೆಯನ್ನು ಹೇಗೆ ನಾವು ನಿವಾರಿಸಬಹುದು ಎಂಬ ಕೆಲವು ಉಪಯುಕ್ತ ಸಲಹೆಗಳನ್ನು ನೀಡುತ್ತದೆ.**

**ಪ್ರಮುಖ ಪದಗಳು: ವಾಚನ ಹತ್ಯೆ– readicide, ಮೌಲ್ಯಯುತ ಓದು– valuable reading, ಓದುವಿಕೆ– reading, ಓದಿಗೆ ಉತ್ತೇಜನ– Encourage to reading.**

ರೀಡಿಸೈಡ್ (ವಾಚನ ಹತ್ಯೆ) ಎಂಬ ಪದವನ್ನು ಲೇಖಕರೇ ಸೃಷ್ಟಿಸಿದ್ದಾರೆ ಹಾಗೂ ಇದನ್ನು 'ಶಾಲೆಗಳಲ್ಲಿ ಕಂಡುಬರುವ ಸ್ತಬ್ಧಗೊಳಿಸುವಂತಹ ಅರ್ಥರಹಿತವಾದ ಅಭ್ಯಾಸಗಳ ಮೂಲಕ ಪ್ರೀತಿಯಿಂದ ಓದುವ ಮನಸ್ಸನ್ನು ವ್ಯವಸ್ಥಿತವಾಗಿ ಕೊಲ್ಲುವುದು' ಎಂದು ವ್ಯಾಖ್ಯಾನಿಸಿದ್ದಾರೆ.

ಗಲ್ಲಾಘರ್ ತಮ್ಮ ಇಪ್ಪತ್ತೆರಡು ವರ್ಷಗಳ ಪ್ರೌಢಶಾಲಾ ಶಿಕ್ಷಕರ ಅನುಭವದಲ್ಲಿ ಗಮನಿಸಿದಂತೆ ಶಾಲೆಗಳಲ್ಲಿನ ಹಲವಾರು ಅಭ್ಯಾಸಗಳು ಮಕ್ಕಳು ಪ್ರೌಢಶಾಲೆಗೆ ಬರುವ ಮುಂಚೆಯೇ ಅವರು ಓದುವುದನ್ನು ದ್ವೇಷಿಸುವಂತೆ ಮಾಡಿರುತ್ತವೆ.

ಅವರು ವಿವರಿಸುವಂತೆ ಕಿಂಡರ್ ಗಾರ್ಡನ್ (ಶಿಶುವಿಹಾರ), ೫ನೇ ತರಗತಿಯ ಹಾಗೂ ೧೨ನೇ ತರಗತಿಯ ಮಕ್ಕಳ ಮೇಲೆ ಒಂದು ಅಧ್ಯಯನವನ್ನು ಮಾಡುವುದಾದರೆ, ಓದುವುದರ ಮೇಲೆ ಮಕ್ಕಳ ಮನೋಭಾವವು ಉತ್ಸಾಹದಿಂದ ಆರಂಭವಾಗಿ ವ್ಯತ್ಯಾಸವಿಲ್ಲದ ಸ್ಥಿತಿಯ ಅನಂತರ ಕೊನೆಗೆ ಹಗೆತನಕ್ಕೆ ಬದಲಾಗುತ್ತದೆ.

ಶಾಲೆಗಳು ಓದುವಿಕೆಯನ್ನು ಉತ್ತೇಜಿಸಲು ಉದ್ದೇಶಿಸಿದ್ದರೂ ಮತ್ತು ಶಿಕ್ಷಕರು ಮಕ್ಕಳನ್ನು ಓದಲು ಪ್ರೇರೇಪಿಸುತ್ತಿದ್ದೇವೆ ಎಂದು ಭಾವಿಸುತ್ತಾರಾದರೂ, ವಾಸ್ತವ ಸ್ಥಿತಿಯು ಈ ರೀತಿಯಾಗಿಲ್ಲ ಎಂದು ಅಂಕಿಅಂಶಗಳು ತೋರಿಸುತ್ತವೆ.

ಬಡತನ, ಪೋಷಕರ ಶಿಕ್ಷಣದ ಕೊರತೆ, ಮನೆಯಲ್ಲಿ ಓದಲು ಪುಸ್ತಕಗಳ ಕೊರತೆ ಇರುವ ವಾತಾವರಣ, ದ್ವಿತೀಯ ಭಾಷೆಯ ಸಮಸ್ಯೆಗಳು, ಧಾವಂತದ

ಮಕ್ಕಳ ಯುಗ ಮತ್ತು ಇತರೆ ಮನರಂಜನಾ ಆಯ್ಕೆಗಳನ್ನು ಶಿಕ್ಷಕರು ಇದಕ್ಕೆ ಈ ಕಾರಣವಾಗಿ ಪಟ್ಟಿಮಾಡುತ್ತಾರೆ.

ಈ ಕಾರಣಗಳೇ ರೀಡಿಸೈಡ್ (ವಾಚನ ಹತ್ಯೆ)ಗೆ ಕೊಡುಗೆಗಳಾಗುತ್ತವೆ, ಅಷ್ಟೇ ಅಲ್ಲದೆ ಶಾಲೆಯ ಒಳಗೂ ಓದುವಿಕೆಯನ್ನು ಕೊಲ್ಲುವಂತಹ ಹಲವು ಕಾರಣಗಳಿವೆ. ಓದುಗರನ್ನು ಅಭಿವೃದ್ಧಿಪಡಿಸುವ ಬದಲು ಪರೀಕ್ಷೆಯನ್ನು ತೆಗೆದುಕೊಳ್ಳುವವರ ಮೇಲೆ ಕೇಂದ್ರೀಕರಿಸುವುದು, 'ಮಾಯಾ ಮಾತ್ರೆ'ಯಂತೆ ಓದಿಗೆ ಅನುವು ಮಾಡುವ ದಿಢೀರ್ ಕಾರ್ಯಕ್ರಮಗಳು, ಅಧಿಕೃತವಾದ ಓದುವ ಅನುಭವಗಳನ್ನು ಸೀಮಿತಗೊಳಿಸುವುದು, ಪುಸ್ತಕಗಳ ಕಡಮೆ ಮತ್ತು ಅತಿಯಾದ ಬೋಧನೆ ಮತ್ತು ಪುಸ್ತಕದ ಮೌನ ಓದುವಿಕೆಯನ್ನು ಉತ್ತೇಜಿಸುವ ಬದಲು ಶೈಕ್ಷಣಿಕ ಓದಿಗೆ ಒತ್ತು ಕೊಡುವುದು, ಹೀಗೆ ರೀಡಿಸೈಡ್ (ವಾಚನ ಹತ್ಯೆ)ಗೆ ಕಾರಣವಾಗುತ್ತವೆ.

"ಶಿಕ್ಷಕರು ಮತ್ತು ಪಠ್ಯಕ್ರಮದ ನಿರ್ದೇಶಕರು ಹೇಳುವಂತೆ 'ಮೌಲ್ಯಯುತ' ಓದುವಿಕೆ ಎಂದರೇನು? ಬಹುತೇಕ ಶಾಲೆಗಳ ಅಭ್ಯಾಸವನ್ನು ನೋಡುವುದಾದರೆ ಶಾಲೆಯೊಂದು ಓದುವುದಕ್ಕೆ 'ಮೌಲ್ಯ' ನೀಡುತ್ತದೆ ಎನ್ನುವುದರ ಅರ್ಥವೇನೆಂದರೆ, ಶಾಲೆಯು ರಾಜ್ಯ ಕಡ್ಡಾಯಗೊಳಿಸಿರುವ ವಾಚನ ಸಾಮಗ್ರಿಗಳು ಪರೀಕ್ಷಾ ಅಂಕಗಳನ್ನು ಹೆಚ್ಚಿಸುವುದರ ಮೇಲೆ ತೀವ್ರವಾಗಿ ಕೇಂದ್ರೀಕರಿಸುತ್ತದೆ –ಇದು ನಮ್ಮ ವಿದ್ಯಾರ್ಥಿಗಳು ತಮ್ಮ ಪ್ರೌಢಾವಸ್ಥೆಯಲ್ಲಿ, ಎಂದಾದರೂ ಓಮ್ಮೆ, ವಿರಳವಾಗಿ ಓದುವ ರೀತಿಯದ್ದಾಗಿರುತ್ತದೆ," ಎಂದು ಗಲ್ಲಾಘರ್ ಸೂಚಿಸುತ್ತಾರೆ.

ಈ ಪುಸ್ತಕವು ಐದು ಅಧ್ಯಾಯಗಳನ್ನು ಹೊಂದಿದೆ: ಅವುಗಳೆಂದರೆ 'ಎಲಿಫೆಂಟ್ ಇನ್ ದ ರೂಮ್' (ಕೋಣೆಯಲ್ಲಿರುವ ಆನೆ), ಎನ್ಡೇಂಜರ್ಡ್ ಮೈಂಡ್ಸ್ (ಅಳಿವಿನಂಚಿನಲ್ಲಿರುವ ಮನಸ್ಸುಗಳು), ಅವಾಯ್‌ಡಿಂಗ್ ದ ಸುನಾಮಿ (ಸುನಾಮಿಯನ್ನು ತಪ್ಪಿಸುವುದು), ಫೈಂಡಿಂಗ್ ದ ಸ್ವೀಟ್ ಸ್ಪಾಟ್ ಆಫ್ ಇನ್ಸ್ಟ್ರಕ್ಷನ್ (ಬೋಧನೆಯ ಸಿಹಿ ತಾಣವನ್ನು ಕಂಡುಕೊಳ್ಳುವುದು) ಮತ್ತು ಎಂಡಿಂಗ್ ರೀಡಿಸೈಡ್ (ವಾಚನದ ಹತ್ಯೆಯನ್ನು ಕೊನೆಗೊಳಿಸುವುದು). ಪ್ರತಿಯೊಂದು ಅಧ್ಯಾಯವು ರೀಡಿಸೈಡ್ (ವಾಚನ ಹತ್ಯೆ)ನ ಕಾರಣಗಳನ್ನು ಆಳವಾಗಿ ನೋಡುತ್ತದೆ ಮತ್ತು ಪುಸ್ತಕಗಳ ಬಗ್ಗೆ ಆಸಕ್ತಿ ಇಲ್ಲದ ವಿದ್ಯಾರ್ಥಿಗಳೂ ಸಹ ಪದವಿಯನ್ನು ಪಡೆಯಲು ನಾವು ಏನು ಮಾಡಬಹುದು ಎಂಬುದನ್ನು ಅನ್ವೇಷಿಸುವುದರೊಂದಿಗೆ ಕೊನೆಗೊಳ್ಳುತ್ತದೆ.

* * *

**ಚಿಂತನಾತ್ಮಕ ಪ್ರಶ್ನೆಗಳು:**

೧. ಓದುವ ಪರಿಸರದ ಬಗ್ಗೆ ನಿಮ್ಮ ಶಾಲೆಗಳು ಹಾಗೂ ಮನೆಗಳಲ್ಲಿ ಮಕ್ಕಳಿಗೆ ಎಷ್ಟು ಅವಕಾಶ ಕಲ್ಪಿಸಲಾಗಿದೆ?

೨. ಪುಸ್ತಕದ ಓದಿಗೂ ಮೊಬೈಲ್ ಅಥವಾ ಕಂಪ್ಯೂಟರ್‌ನ ಓದಿಗೂ ವ್ಯತ್ಯಾಸವಿದೆಯೇ?

೩. ಪರೀಕ್ಷಾ ದೃಷ್ಟಿಯಿಂದ ಓದುವ ಮಕ್ಕಳನ್ನು ಆಸಕ್ತಿಯಿಂದ ಓದುವಂತೆ ಮಾಡಲು ನೀವು ಯಾವ ಯೋಜನೆಗಳನ್ನು ರೂಪಿಸಬಹುದು?

**ವಂದನಾ ಪುರಿ:** 'ಉರ್ಬಾನಾ–ಚಾಂಪೇನ್'ನ ಇಲಿನಾಯ್ಸ್ ವಿಶ್ವವಿದ್ಯಾಲಯದಿಂದ ಭಾಷಾಶಾಸ್ತ್ರದಲ್ಲಿ ಪಿಎಚ್.ಡಿ., ಪಡೆದಿದ್ದಾರೆ. ಅವರ ಸಂಶೋಧನಾ ಆಸಕ್ತಿಗಳಲ್ಲಿ ಅಕೌಸ್ಟಿಕ್ ಫೋನೆಟಿಕ್ಸ್, ಇಂಟನೇಶನ್, ಪ್ರೊಸೋಡಿ, ದ್ವಿಭಾಷಾವಾದ, ನವ ಇಂಗ್ಲಿಷ್‌ಗಳು ಮತ್ತು ಸಾಮಾಜಿಕ ಭಾಷಾಶಾಸ್ತ್ರಗಳೂ ಸೇರಿವೆ. ಪ್ರಸ್ತುತ, ಇವರು ಉದಯಪುರದಲ್ಲಿರುವ ವಿದ್ಯಾಭವನದಲ್ಲಿ ಸಲಹೆಗಾರರಾಗಿದ್ದಾರೆ. vandana22puri@yahoo.com

**ಅನುವಾದ:** ಕಾರ್ತಿಕ್ ಕೆ / **ಪರಿಶೀಲನೆ:** ಮಂಜುನಾಥ್ ಹೆಗಡೆ

**ಮೂಲ:** *Language and Language Teaching,* Volume 3 Number 1 Issue 5 January 2014.

❑